# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1166 |
| ಮಾನ್ಯ ಸದಸ್ಯರ ಹೆಸರು | ಡಾ: ತೇಜಸ್ವಿನಿ ಗೌಡ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 23-12-2021 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿರುವ "ವೈನ್‌ಯಾರ್ಡ್‌ಗಳೆಷ್ಟು"; ಉತ್ಪತ್ತಿಯಾಗುತ್ತಿರುವ "ವೈನ್" ಪ್ರಮಾಣವೆಷ್ಟು; ಯಾವ ಯಾವ ರೀತಿಯ "ವೈನ್" ಉತ್ಪತ್ತಿ ಮಾಡಲಾಗುತ್ತಿದೆ; | 2021-22 ನೇ ಅಬಕಾರಿ ಸಾಲಿನಲ್ಲಿ ರಾಜ್ಯದಲ್ಲಿ ಒಟ್ಟು 22 ವೈನರಿಗಳ ಸನ್ನದುಗಳನ್ನು ನವೀಕರಿಸಲಾಗಿರುತ್ತದೆ. ಈ ಪೈಕಿ 15 ಫ್ರೂಟ್ ವೈನರಿ, 3 ಫೋರ್ಟಿಫೈಡ್ ವೈನರಿ ಮತ್ತು 4 ಫ್ರೂಟ್ ವೈನರಿ ಮತ್ತು ಫೋರ್ಟಿಫೈಡ್ ವೈನರಿ ಎರಡನ್ನೂ ಒಳಗೊಂಡ ಘಟಕಗಳಾಗಿರುತ್ತದೆ.<br>ವೈನ್ ಉತ್ಪಾದನೆಯು ಮಾರುಕಟ್ಟೆಯ ಬೇಡಿಕೆಗೆ ಅವಲಂಬಿತವಾಗಿದ್ದು, ವೈನರಿಗಳಲ್ಲಿ ವಿವಿಧ ಬಗೆಯ ಫ್ರೂಟ್ ವೈನ್ ಮತ್ತು ಫೋರ್ಟಿಫೈಡ್ ವೈನ್ ಗಳನ್ನು ಉತ್ಪಾದಿಸಲಾಗುತ್ತಿದೆ. ವೈನರಿಗಳ ಹೆಸರು ಮತ್ತು ಉತ್ಪತ್ತಿಯಾಗುತ್ತಿರುವ ವೈನ್ ಪ್ರಮಾಣ ವಿವರವನ್ನು **ಅನುಬಂಧದಲ್ಲಿ** ಇರಿಸಿದೆ. |
| (ಆ) | ಇತರೆ "ಮದ್ಯ ಸೇವನೆಗೆ" ಗೆ ಹೋಲಿಸಿದ್ದಲ್ಲಿ ವೈನ್ (ರೆಡ್ ಮತ್ತು ವೈಟ್) ಸೇವನೆ "ಆರೋಗ್ಯ ಸ್ನೇಹಿ" ಅಥವಾ ಆರೋಗ್ಯ ವರ್ಧಕ ಎಂಬುದು ವೈಜ್ಞಾನಿಕವಾಗಿ ಸಾಬೀತಾಗಿದೆಯೇ; ವೈನ್ ಸೇವನೆಯಿಂದ ಯಾವುದೇ ರೀತಿಯ ದುಷ್ಪರಿಣಾಮಗಳು ಇಲ್ಲವೇ; | ಇತರೆ "ಮದ್ಯ ಸೇವನೆ" ಗೆ ಹೋಲಿಸಿದ್ದಲ್ಲಿ ವೈನ್ (ರೆಡ್ ಮತ್ತು ವೈಟ್) ಸೇವನೆ "ಆರೋಗ್ಯ ಸ್ನೇಹಿ" ಅಥವಾ ಆರೋಗ್ಯ ವರ್ಧಕ ಎಂಬುದು ವೈಜ್ಞಾನಿಕವಾಗಿ ಸಾಬೀತಾಗಿದೆಯೇ ಎನ್ನುವುದರ ಕುರಿತು ಇಲಾಖೆಗೆ ಮಾಹಿತಿ ಇರುವುದಿಲ್ಲ.<br>ವೈನ್‌ನ ಆಲ್ಕೋಹಾಲಿಕ್ ತೀಕ್ಷ್ಣತೆಯು ಶೇ.7-14 v/v ಮೀರದಂತೆ ಮತ್ತು ಫೋರ್ಟಿಫೈಡ್ ವೈನ್ ಆಲ್ಕೋಹಾಲಿಕ್ ತೀಕ್ಷ್ಣತೆಯು ಶೇ.16 v/v ಮೀರದಂತೆ ಇದ್ದು, ಇತರೆ |

| | | |
|---|---|---|
| | | ಮದ್ಯದಂತೆ ವೈನ್ ಸೇವನೆಯು ಸಹ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುವ ಸಂಭವವಿದೆ. ಹಾಗಾಗಿ, ವೈನ್ ಬಾಟಲ್‌ಗಳಲ್ಲಿನ ಲೇಬಲ್‌ಗಳ ಮೇಲೆ ಕಡ್ಡಾಯವಾಗಿ "ಮದ್ಯಸೇವನೆ ಆರೋಗ್ಯಕ್ಕೆ ಹಾನಿಕರ" ಎಂಬ ಕಾನೂನುಬದ್ಧ ಎಚ್ಚರಿಕೆಯನ್ನು ಮುದ್ರಿಸಲಾಗುತ್ತಿದೆ. |
| (ಇ) | ಮಲೆನಾಡಿನ ಸಹ್ಯಾದ್ರಿ ವಲಯ ಕೃಷಿಕರು ಅನೇಕ ಬಗೆ ಬಗೆಯ ವೈನ್ ತಯಾರಿಕೆಯಲ್ಲಿ ಪರಿಣಿತಿ ಪಡೆದಿರುವುದು ಇಲಾಖೆಯ ಗಮನಕ್ಕೆ ಬಂದಿದೆಯೇ; (ಉದಾ: ವೀಳ್ಯದೆಲೆ, ನೆಲ್ಲಿಕಾಯಿ, ಸಾಂಬಾರು ಪದಾರ್ಥಗಳು, ಮೆಣಸಿನ ಕಾಯಿ) ಇವುಗಳ ಉತ್ಪಾದನೆ ಉತ್ತೇಜಿಸಿ ಮಾರುಕಟ್ಟೆ ಹೆಚ್ಚಿಸಿ ರೈತರಿಗೆ ಲಾಭದಾಯಕವಾಗಿಸಲು ಚಿಂತನೆ ಇದೆಯೇ; | ಮಲೆನಾಡಿನ ಸಹ್ಯಾದ್ರಿ ವಲಯ ಕೃಷಿಕರು ಅನೇಕ ಬಗೆ ಬಗೆಯ ವೈನ್ ತಯಾರಿಕೆಯಲ್ಲಿ ಪರಿಣಿತಿ ಪಡೆದಿರುವುದು ಇಲಾಖೆಯ ಗಮನಕ್ಕೆ ಬಂದಿರುವುದಿಲ್ಲ.<br>ಆದಾಗ್ಯೂ, ವೈನರಿ ಸನ್ನದು ಅಪೇಕ್ಷಿತರು ವೀಳ್ಯದೆಲೆ, ನೆಲ್ಲಿಕಾಯಿ, ಸಾಂಬಾರು ಪದಾರ್ಥಗಳು, ಮೆಣಸಿನ ಕಾಯಿ ಉಪಯೋಗಿಸಿಕೊಂಡು ವೈನ್ ತಯಾರಿಸಲು ನಿಯಮಾನುಸಾರ ಅಗತ್ಯ ದಾಖಲೆಗಳೊಂದಿಗೆ ಅರ್ಜಿಯನ್ನು ಸಲ್ಲಿಸಿದಲ್ಲಿ, ಅಂತಹ ಅರ್ಜಿಗಳನ್ನು ನಿಯಮಾನುಸಾರ ಪರಿಶೀಲಿಸಿ, ವೈನರಿ ಸನ್ನದು ಮಂಜೂರು ಮಾಡಲು ಕ್ರಮ ವಹಿಸಲಾಗುವುದು. |
| (ಈ) | ಅತಿಯಾದ ಮದ್ಯ ಸೇವನೆಯಿಂದ ಮದ್ಯ ವ್ಯಸನಿಗಳನ್ನು ಮುಕ್ತರಾಗಿಸಲು ಇಲಾಖೆಯಿಂದ ಯಾವುದಾದರೂ ಪ್ರಯತ್ನಗಳಾಗಿವೆಯೇ? | ಅಬಕಾರಿ ಇಲಾಖೆಯ ವತಿಯಿಂದ ಅಕ್ರಮ ಮದ್ಯದ ದುಷ್ಪರಿಣಾಮಗಳ ಕುರಿತು ಕ್ಷೇತ್ರ ಸಿಬ್ಬಂದಿಯವರಿಂದ ಗ್ರಾಮಾಂತರ ಹಾಗೂ ನಗರ ಪ್ರದೇಶಗಳಲ್ಲಿ ಜನ ಜಾಗೃತಿ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತಿದೆ. ಗ್ರಾಮ ಸಭೆಗಳಲ್ಲಿ ಅಕ್ರಮ ಮದ್ಯ ವಿಷಯಗಳ ಬಗ್ಗೆ ಚರ್ಚಿಸಲಾಗುತ್ತಿದೆ. ತಾಲ್ಲೂಕು ಹಾಗೂ ಜಿಲ್ಲಾ ಮಟ್ಟದ ಕಾನೂನು ಅರಿವು ಕಾರ್ಯಕ್ರಮಗಳಲ್ಲಿ ಅಕ್ರಮ ಮದ್ಯದಿಂದಾಗುವ ದುಷ್ಪರಿಣಾಮಗಳೊಂದಿಗೆ ಕಾನೂನಿನ ತಿಳಿವಳಿಕೆಯನ್ನು ನೀಡಲಾಗುತ್ತಿದೆ. ಅಲ್ಲದೇ, ಮದ್ಯದ ಬಾಟಲುಗಳಲ್ಲಿನ ಲೇಬಲ್‌ಗಳ ಮೇಲೆ ಕಡ್ಡಾಯವಾಗಿ "ಮದ್ಯ ಸೇವನೆ ಆರೋಗ್ಯಕ್ಕೆ ಹಾನಿಕರ" ಎಂಬ ಕಾನೂನುಬದ್ಧ ಎಚ್ಚರಿಕೆಯನ್ನು ಮುದ್ರಿಸಲಾಗುತ್ತಿದೆ. |

ಆಇ 138 ಇಎಲ್‌ಕ್ಯೂ 2021

(ಕೆ. ಗೋಪಾಲಯ್ಯ)

# ಅನುಬಂಧ

## ಫ್ರೂಟ್ ವೈನರಿ

| ಕ್ರ.ಸಂ | ಹೆಸರು ಮತ್ತು ವಿಳಾಸ | ಉತ್ಪಾದಿಸಲಾದ ಫ್ರೂಟ್ ವೈನ್ ಪ್ರಮಾಣ (ಲೀಟರ್ ಗಳಲ್ಲಿ) | |
|---|---|---|---|
| | | 2020-21 ನೇ ಅಬಕಾರಿ ಸಾಲು (ಜುಲೈ 2020 ರಿಂದ ಜೂನ್-2021) | 2021-22 ನೇ ಅಬಕಾರಿ ಸಾಲು (ಜುಲೈ 2021 ರಿಂದ ನವೆಂಬರ್ 2021 ರ ಅಂತ್ಯಕ್ಕೆ) |
| 1 | ಮೆ:ಎಸ್‌ಡಿಯು ವೈನರಿ ಪ್ರೈವೇಟ್ ಲಿಮಿಟೆಡ್, ನಂ. 644, 645 & 646, ಅಲಕಾಪುರ ಗ್ರಾಮ, ತೊಂಡೇಬಾವಿ ಹೋಬಳಿ, ಗೌರಿಬಿದನೂರು ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ | 22014 | 21159 |
| 2 | ಮೆ: ನಿಸರ್ಗ ವೈನ್‌ಯಾರ್ಡ್ಸ್ ಪ್ರೈವೇಟ್ ಲಿಮಿಟೆಡ್, ಸರ್ವೆ ನಂ. 274/1ಬಿ, ಹಲಗಣಿ ಗ್ರಾಮ, ವಿಜಯಪುರ ತಾಲ್ಲೂಕು, ವಿಜಯಪುರ ಜಿಲ್ಲೆ | 216777 | 13464 |
| 3 | ಮೆ॥ ಪ್ರಾಟೆಲ್ಲೀ ವೈನ್ಸ್ ಪ್ರೈವೇಟ್ ಲಿಮಿಟೆಡ್, (ಉಪ ಗುತ್ತಿಗೆದಾರರು ಮೆ॥ ಹಂಪಿ ಹೆರಿಟೇಜ್ ವೈನ್‌ಯಾರ್ಡ್ಸ್ ಪ್ರೈವೇಟ್ ಲಿಮಿಟೆಡ್), ಆರ್.ಎಸ್.-230-ಬಿ, ಪ್ಲಾಟ್ ನಂ.3, ಬೂತನಾಳ ಟ್ಯಾಂಕ್, ವಿಜಯಪುರ ಜಿಲ್ಲೆ | 266400 | 73950 |
| 4 | ಮೆ॥ ಕೆಆರ್‌ಎಸ್‌ಎಮ್‌ಎ ಎಸ್ಟೇಟ್ ಪ್ರೈವೇಟ್ ಲಿಮಿಟೆಡ್, ಜೂಲಕುಂಟಿ ಗ್ರಾಮ, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ, | 3780 | ಉತ್ಪಾದನೆ ಮಾಡಿರುವುದಿಲ್ಲ |
| 5 | ಮೆ: ಸೂಲಾ ವೈನ್‌ಯಾರ್ಡ್ಸ್ ಪ್ರೈವೇಟ್ ಲಿಮಿಟೆಡ್, ಖಾತಾ ಸಂ. 115/86, ಗಂಗೆದೊಡ್ಡಿ ಗ್ರಾಮ, ಚಕ್ಕೆರೆ ಅಂಚೆ, ಮಳೂರು ಹೋಬಳಿ, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ | 782612 | 546966 |
| 6 | ಮೆ: ಕೃಷ್ಣಮೃಗ ವೈನ್ ಯಾರ್ಡ್, ಸಂ. 122/ಪಿ8, ಮೈದನಹಳ್ಳಿ, ಕೊಡಿಗೇನಹಳ್ಳಿ ಹೋಬಳಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ | 35067 | ಉತ್ಪಾದನೆ ಮಾಡಿರುವುದಿಲ್ಲ |
| 7 | ಮೆ॥ ಸುಲಾ ವೈನ್‌ಯಾರ್ಡ್ಸ್ ಪ್ರೈವೇಟ್ ಲಿಮಿಟೆಡ್, (ಇಂಡಿಯನ್ ಎಂಬಿಯನ್ಸ್ ವೈನ್ ವೈನ್‌ಯಾರ್ಡ್ಸ್ ಪ್ರೈವೇಟ್ ಲಿಮಿಟೆಡ್ ರವರ ಉಪ ಗುತ್ತಿಗೆದಾರರು) ಸರ್ವೆ ನಂ:69/ಬಿ ತಡೋಲಾ, ಬಸವಕಲ್ಯಾಣ ತಾಲ್ಲೂಕು, ಬೀದರ್ ಜಿಲ್ಲೆ, | 1206738 | ಉತ್ಪಾದನೆ ಮಾಡಿರುವುದಿಲ್ಲ |

| | | | |
|---|---|---|---|
| 8 | ಮೆ:ಜಾನ್ ಡಿಸ್ಟಿಲರೀಸ್ ಪ್ರೈವೇಟ್ ಲಿಮಿಟೆಡ್(ವೈನರಿ ವಿಭಾಗ-2) ಸೈಟ್ ನಂ.8/1, ಚುಂಚನಕುಪ್ಪೆ, ತಾವರೆಕೆರೆ ಹೋಬಳಿ, ದೊಡ್ಡ ಆಲದಮರ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು | 230364 | 166626 |
| 9 | ಮೆ:ರಿಕೊ ವೈನರಿ (ಪ್ರೈವೇಟ್) ಲಿಮಿಟೆಡ್, ಕನ್ನಾಳ ಗ್ರಾಮ, ಸರ್ವೆ ನಂ.139/2, ಕನ್ನಾಳ ಪೋಸ್ಟ್, ವಿಜಯಪುರ ತಾಲ್ಲೂಕು, ವಿಜಯಪುರ ಜಿಲ್ಲೆ | 960389.7 | 252081.04 |
| 10 | ಶ್ರೀ ಎಸ್.ರವೀಂದ್ರನಾಥ, ಲಾ ಟೆರಾ ವೈನರಿ, ಸರ್ವೆ ನಂ.116/9, ಸಾರಗೊಂಡ್ಲು ಗ್ರಾಮ, ಡಿ.ಪಾಳ್ಯ ಹೋಬಳಿ, ಗೌರಿಬಿದನೂರು ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ | 1827 | ಉತ್ಪಾದನೆ ಮಾಡಿರುವುದಿಲ್ಲ |
| 11 | ಮೆ: ನೆಕ್ಟರ್ ವೈನ್‌ಯಾರ್ಡ್ ಪ್ರೈವೇಟ್ ಲಿಮಿಟೆಡ್, ಆರ್.ಎಸ್.ನಂ.524/4, ಅಥಣಿ-ಬಿಜಾಪೂರ ರಸ್ತೆ, ತೆಲಸಂಗ, ಬೆಳಗಾವಿ ಜಿಲ್ಲೆ | ಉತ್ಪಾದನೆ ಮಾಡಿರುವುದಿಲ್ಲ | ಉತ್ಪಾದನೆ ಮಾಡಿರುವುದಿಲ್ಲ |
| 12 | ವ್ಯವಸ್ಥಾಪಕ ನಿರ್ದೇಶಕರು, ಕಿಕ್ಕೇರಿ ಫಾರಂ ಫುಡ್ ಅಂಡ್ ಬೆವರೇಜಸ್ ಪ್ರೈವೇಟ್ ಲಿಮಿಟೆಡ್, ತಲಿಸ್ವಾ ವೈನರಿ, ಸ್ವತ್ತಿನ ಸಂಖ್ಯೆ: 152400702500420010, ಸರ್ವೆ ನಂ.25/3, ಕಿಕ್ಕೇರಿ ಗ್ರಾಮ, ಹಣಗೆರೆ ಅಂಚೆ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ | ಉತ್ಪಾದನೆ ಮಾಡಿರುವುದಿಲ್ಲ | ಉತ್ಪಾದನೆ ಮಾಡಿರುವುದಿಲ್ಲ |
| 13 | ಮೆ: ಬಿಡದಿ ವ್ಯಾಲಿ ಬ್ರಿವರೇಜಸ್ ಪ್ರೈವೇಟ್ ಲಿಮಿಟೆಡ್, ಸರ್ವೆ ನಂ.140/1ಎ, 140/1ಬಿ, 220/2, ದೊಡ್ಡಕಲ್‌ಬಾಳ್ ಗ್ರಾಮ, ಹಾರೋಹಳ್ಳಿ ಹೋಬಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ | ಉತ್ಪಾದನೆ ಮಾಡಿರುವುದಿಲ್ಲ | 90450 |
| 14 | ಮೆ॥ ಬೆಂಗಳೂರು ಸೋಮ ವೈನ್‌ಯಾರ್ಡ್ಸ್ ಅಂಡ್ ವೈನರಿ ಪ್ರೈವೇಟ್ ಲಿಮಿಟೆಡ್, ಸರ್ವೆ ಸಂಖ್ಯೆ: 5/6, ರಾಜು ಎಸ್ಟೇಟ್, ಬೊಮ್ಮನಹಳ್ಳಿ, ಗುಂಡುಮಗೆರೆ ಗ್ರಾಮ, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಉತ್ಪಾದನೆ ಮಾಡಿರುವುದಿಲ್ಲ | ಉತ್ಪಾದನೆ ಮಾಡಿರುವುದಿಲ್ಲ |
| 15 | ಮೆ: ಯುನೈಟೆಡ್ ವೈನರಿ ಪಾಲುದಾರರು (1) ಹಿಮವಂತ್ ಹೆಚ್.ಜೆ (2) ಬಿ.ಯು ಮಹಾನ್ (3) ಜರೀನ್ ಜೋಸೆಫ್, ಸರ್ವೆ ನಂ.7-ಪಿ, ಪ್ಲಾಟ್ ನಂ.213-ಎ3, ಹೊಳೆನರಸೀಪುರ ರಸ್ತೆ, ಕೆಐಎಡಿಬಿ ಇಂಡಸ್ಟ್ರೀಯಲ್ ಏರಿಯಾ, ನಾಗತವಳ್ಳಿ ಗ್ರಾಮ, ಕಸಬಾ ಹೋಬಳಿ, ಹಾಸನ ತಾಲ್ಲೂಕು, ಹಾಸನ ಜಿಲ್ಲೆ | ಸನ್ನದು ಮಂಜೂರು ಆಗಿರುವುದಿಲ್ಲ | ಉತ್ಪಾದನೆ ಮಾಡಿರುವುದಿಲ್ಲ |

## ಫೋರ್ಟಿಫೈಡ್ ವೈನರಿ

| ಕ್ರಸಂ | ಹೆಸರು ಮತ್ತು ವಿಳಾಸ | ಉತ್ಪಾದಿಸಲಾದ ಫೋರ್ಟಿಫೈಡ್ ವೈನ್ ಪ್ರಮಾಣ (ಲೀಟರ್ ಗಳಲ್ಲಿ) | |
|---|---|---|---|
| | | 2020-21 ನೇ ಅಬಕಾರಿ ಸಾಲು (ಜುಲೈ 2020 ರಿಂದ ಜೂನ್-2021) | 2021-22 ನೇ ಅಬಕಾರಿ ಸಾಲು (ಜುಲೈ 2021 ರಿಂದ ನವೆಂಬರ್ 2021 ರ ಅಂತ್ಯಕ್ಕೆ) |
| 1 | ಮೆ: ಸಿಲಿಕಾನ್ ವ್ಯಾಲಿ ಗ್ರೇಪ್ ವೈನರಿ ಪ್ರೈವೇಟ್ ಲಿಮಿಟೆಡ್, ಸರ್ವೆ ನಂ.47, ದಾರಾಪುರ ಗ್ರಾಮ, ಮಾಯಗಾನಹಳ್ಳಿ ಅಂಚೆ, ರಾಮನಗರ ತಾಲ್ಲೂಕು, ರಾಮನಗರ ಜಿಲ್ಲೆ | 1523271.260 | 614599.60 |
| 2 | ಮೆ: ಇಂಡೋಸ್ಪಿರಿಟ್ ಬಿವರೇಜಸ್ ಪ್ರೈವೇಟ್ ಲಿಮಿಟೆಡ್, (ಲೆಸ್ಸಿ ಆಫ್ ನೆಕ್ಟರ್ ವೈನ್‌ಯಾರ್ಡ್ ಪ್ರೈವೇಟ್ ಲಿಮಿಟೆಡ್ ), ಆರ್.ಎಸ್.ನಂ.524/4, ತೆಲಸಂಗ-591 265, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ | 67485 | ಉತ್ಪಾದನೆ ಮಾಡಿರುವುದಿಲ್ಲ |
| 3 | ಮೆ: ಬ್ಲಾಕ್‌ಬಕ್ ವೈನ್‌ಯಾರ್ಡ್ಸ್ ಪ್ರೈವೇಟ್ ಲಿಮಿಟೆಡ್, ಸ.ನಂ:122/ಪಿ8, ಮೈದನಹಳ್ಳಿ, ಕೊಡಿಗೇನಹಳ್ಳಿ ಹೋಬಳಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ | ಉತ್ಪಾದನೆ ಮಾಡಿರುವುದಿಲ್ಲ | ಉತ್ಪಾದನೆ ಮಾಡಿರುವುದಿಲ್ಲ |

## ಫ್ರೂಟ್ ವೈನರಿ ಮತ್ತು ಫೋರ್ಟಿಫೈಡ್ ವೈನರಿ ಎರಡನ್ನೂ ಒಳಗೊಂಡ ಘಟಕಗಳು

| ಕ್ರಸಂ | ಹೆಸರು ಮತ್ತು ವಿಳಾಸ | ಉತ್ಪಾದಿಸಲಾದ ಫ್ರೂಟ್ ವೈನ್ ಪ್ರಮಾಣ (ಲೀಟರ್ ಗಳಲ್ಲಿ) | | ಉತ್ಪಾದಿಸಲಾದ ಫೋರ್ಟಿಫೈಡ್ ವೈನ್ ಪ್ರಮಾಣ (ಲೀಟರ್ ಗಳಲ್ಲಿ) | |
|---|---|---|---|---|---|
| | | 2020-21 ನೇ ಅಬಕಾರಿ ಸಾಲು (ಜುಲೈ 2020 ರಿಂದ ಜೂನ್-2021) | 2021-22 ನೇ ಅಬಕಾರಿ ಸಾಲು (ಜುಲೈ 2021 ರಿಂದ ನವೆಂಬರ್ 2021 ರ ಅಂತ್ಯಕ್ಕೆ) | 2020-21 ನೇ ಅಬಕಾರಿ ಸಾಲು (ಜುಲೈ 2020 ರಿಂದ ಜೂನ್-2021) | 2021-22 ನೇ ಅಬಕಾರಿ ಸಾಲು (ಜುಲೈ 2021 ರಿಂದ ನವೆಂಬರ್ 2021 ರ ಅಂತ್ಯಕ್ಕೆ) |
| 1 | ಮೆ: ಗ್ರೋವರ್ ಜಾಂಪಾ ವೈನ್‌ಯಾರ್ಡ್ಸ್ ಲಿಮಿಟೆಡ್, ಸರ್ವೆ ನಂ.63, ರಘುನಾಥಪುರ, ಕಸಬ ಹೋಬಳಿ, | 552652 | 223827 | 298537 | 130474 |

| | | | | | |
|---|---|---|---|---|---|
| | ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | | | | |
| 2 | ಮೆ॥ ಕೃಷ್ಣ ವ್ಯಾಲಿ ವೈನ್‌ಯಾರ್ಡ್ ಪ್ರೈವೇಟ್ ಲಿಮಿಟೆಡ್, ಸರ್ವೆ ನಂ. 277/1 ತೊದಲಬಾಗಿ ಗ್ರಾಮ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 36430 | 93771 | ಉತ್ಪಾದನೆ ಮಾಡಿರುವುದಿಲ್ಲ | ಉತ್ಪಾದನೆ ಮಾಡಿರುವುದಿಲ್ಲ |
| 3 | ಮೆ: ನಂದಿ ವ್ಯಾಲಿ ವೈನರಿ ಪ್ರೈವೇಟ್ ಲಿಮಿಟೆಡ್, ಸರ್ವೆ ನಂ. 55, 56, ನಾಗದಾಸನಹಳ್ಳಿ, ರಾಜಾನುಕುಂಟೆ ಪೋಸ್ಟ್, ಯಲಹಂಕ ಹೋಬಳಿ, ಬೆಂಗಳೂರು | 35485.220 | 29362.660 | ಉತ್ಪಾದನೆ ಮಾಡಿರುವುದಿಲ್ಲ | ಉತ್ಪಾದನೆ ಮಾಡಿರುವುದಿಲ್ಲ |
| 4 | ಮೆ: ಎಲೈಟ್ ವಿಂಟೇಜ್ ವೈನರಿ ಇಂಡಿಯಾ ಪ್ರೈವೇಟ್ ಲಿಮಿಟೆಡ್, ಸರ್ವೆ ಸಂ. 13/3ಎ, ಮಾಲಾಪುರ ಗ್ರಾಮ, ಜಮಖಂಡಿ ರಸ್ತೆ, ಮುಧೋಳ್ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | 799005.223 | 123169.661 | 205140.140 | 32098.425 |

ಆಇ 138 ಇಎಲ್‌ಕ್ಯೂ 2021